# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 848
2. ಮಾನ್ಯ ಸದಸ್ಯರ ಹೆಸರು : ಶ್ರೀ ಮಾನೆ ಶ್ರೀನಿವಾಸ್ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ : 28/09/2020
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್-19 ಸಾಂಕ್ರಾಮಿಕ ರೋಗ ಹರಡಿ, ಲಾಕ್‌ಡೌನ್ ಘೋಷಣೆಗೊಂಡ ಸಮಯದಲ್ಲಿ ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನು ಮುಂತಾದ ಶ್ರಮಿಕ ವರ್ಗದವರಿಗೆ ರಾಜ್ಯ ಸರ್ಕಾರದಿಂದ ಸಹಾಯಧನ ಘೋಷಣೆಯಾಗಿದ್ದು ಆ ಪ್ರಕಾರ ಗದಗ, ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಎಷ್ಟು ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನುಳಿದ ಘೋಷಿತ ಶ್ರಮಿಕ ವರ್ಗದವರು ನೊಂದಾಯಿತರಾಗಿದ್ದಾರೆ; | ಕೋವಿಡ್-19 ಸಾಂಕ್ರಾಮಿಕ ರೋಗದ ಪರಿಣಾಮವಾಗಿ ಸಂಕಷ್ಟಕ್ಕೊಳಗಾದ ವಿವಿಧ ವರ್ಗದ ಕಾರ್ಮಿಕರಿಗೆ ಪರಿಹಾರವನ್ನು ಸನ್ಮಾನ್ಯ ಮುಖ್ಯಮಂತ್ರಿಯವರು ಘೋಷಿಸಿದ್ದು, ಅಗಸ ಹಾಗೂ ಕ್ಷೌರಿಕ ವೃತ್ತಿಯಲ್ಲಿ ತೊಡಗಿರುವ ಕಾರ್ಮಿಕರುಗಳಿಗೆ ತಲಾ ರೂ.5,000/-ಗಳ ಒಂದು ಬಾರಿಯ ಪರಿಹಾರವನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಜಾರಿಗೊಳಿಸಲಾಗುತ್ತಿದೆ.<br>ಕೋವಿಡ್-19ರ ಪರಿಹಾರ ಧನವನ್ನು ಕೋರಿ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರು ಸೇವಾಸಿಂಧು ವೆಬ್ ಪೋರ್ಟಲ್ ಮೂಲಕ ದಿನಾಂಕ: 31/07/2020ರ ಅಂತ್ಯಕ್ಕೆ ಗದಗ ಜಿಲ್ಲೆಯಲ್ಲಿ 1113, ಧಾರವಾಡ ಜಿಲ್ಲೆಯಲ್ಲಿ 3536 ಹಾಗೂ ಹಾವೇರಿ ಜಿಲ್ಲೆಯಲ್ಲಿ 1923 ಫಲಾನುಭವಿಗಳಿಂದ ಅರ್ಜಿಗಳನ್ನು ಸ್ವೀಕರಿಸಲಾಗಿರುತ್ತದೆ. ಅಗಸ ಹಾಗೂ ಕ್ಷೌರಿಕ ವೃತ್ತಿಯಲ್ಲಿ ತೊಡಗಿರುವ ಅಸಂಘಟಿತ ಕಾರ್ಮಿಕರು ಘೋಷಿಸಿದ ಪರಿಹಾರಕ್ಕಾಗಿ ಅರ್ಜಿ ಸಲ್ಲಿಸಲು ನಿಗದಿತ ಅಂತಿಮ ದಿನಾಂಕ: 15-08-2020 ರವರೆಗೆ ಗದಗ, ಧಾರವಾಡ ಮತ್ತು ಹಾವೇರಿ ಜಿಲ್ಲೆಯಲ್ಲಿ ಅಗಸ ವೃತ್ತಿ ನಿರ್ವಹಿಸುತ್ತಿರುವ 5812 ಮತ್ತು ಕ್ಷೌರಿಕ ವೃತ್ತಿ ನಿರ್ವಹಿಸುತ್ತಿರುವ 6456 ಅರ್ಜಿದಾರರು ಸೇರಿದಂತೆ ಒಟ್ಟು 12268 ಅರ್ಜಿಗಳನ್ನು ಸ್ವೀಕರಿಸಲಾಗಿದೆ. |
| ಆ) | ಸದರಿ ಘೋಷಣೆಯ ಪ್ರಕಾರ ಗದಗ, ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು ಎಷ್ಟು ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನುಳಿದ ಘೋಷಿತ ಶ್ರಮಿಕ ವರ್ಗದವರಿಗೆ ಸಹಾಯಧನವನ್ನು ನೀಡಲಾಗಿದೆ; ಎಷ್ಟು ಬಾಕಿ ಇದೆ; (ವಿವರ ನೀಡುವುದು) | ಪರಿಹಾರ ಧನ ಕೋರಿ ಸಲ್ಲಿಸಿರುವ ಫಲಾನುಭವಿಗಳ ಅರ್ಜಿಗಳ ಹಾಗೂ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರ ಖಾತೆಗಳಿಗೆ ಗದಗ, ಧಾರವಾಡ ಹಾಗೂ ಹಾವೇರಿ ಜಿಲ್ಲೆಗಳಲ್ಲಿ ಪರಿಹಾರದ ಹಣವು ಜಮೆ ಮಾಡಲಾಗಿರುವ ಮಾಹಿತಿಯನ್ನು **ಅನುಬಂಧ-1ರಲ್ಲಿ** ಲಗತ್ತಿಸಲಾಗಿದೆ.<br>ಗದಗ, ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 4704 ಅಗಸ ವೃತ್ತಿಯಲ್ಲಿ ತೊಡಗಿರುವ ಕಾರ್ಮಿಕರಿಗೆ ರೂ. 2.35 ಕೋಟಿ ಹಾಗೂ 5012 ಕ್ಷೌರಿಕ ವೃತ್ತಿಯಲ್ಲಿ ತೊಡಗಿರುವ ಕಾರ್ಮಿಕರುಗಳಿಗೆ ರೂ.2.50 ಕೋಟಿ ಸೇರಿದಂತೆ, ಒಟ್ಟು 9716 ಅರ್ಜಿದಾರರಿಗೆ ತಲಾ ರೂ.5,000/-ಗಳಂತೆ ರೂ.4.85 ಕೋಟಿ ಮೊತ್ತವನ್ನು ಅವರವರ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮೂಲಕ ವರ್ಗಾಯಿಸಲಾಗಿದೆ. ಸದರಿ ವರ್ಗದವರಿಂದ ಸ್ವೀಕರಿಸಿದ ಒಟ್ಟು 12268 ಅರ್ಜಿಗಳಲ್ಲಿ ಅಗಸ ವೃತ್ತಿಯಲ್ಲಿ ತೊಡಗಿಕೊಂಡ 40 ಹಾಗೂ ಕ್ಷೌರಿಕ ವೃತ್ತಿಯಲ್ಲಿ |

| | | |
|---|---|---|
| | | ತೊಡಗಿಕೊಂಡ 92 ಅರ್ಜಿಗಳು ಸೇರಿದಂತೆ, ಒಟ್ಟು 132 ಅರ್ಜಿಗಳು ಷರತ್ತುಗಳಿಗೆ ಅನ್ವಯಿಸದ ಕಾರಣ ತಿರಸ್ಕರಿಸಲಾಗಿದೆ.<br>ಅಗಸ ವೃತ್ತಿಯವರು ಸಲ್ಲಿಸಿದ 1068 ಅರ್ಜಿಗಳು ಹಾಗೂ ಕ್ಷೌರಿಕ ವೃತ್ತಿಯವರು ಸಲ್ಲಿಸಿದ 1352 ಅರ್ಜಿಗಳು ಸೇರಿದಂತೆ ಮಾರ್ಗಸೂಚಿಯನ್ವಯ ತಾಂತ್ರಿಕವಾದ ಹಾಗೂ ಷರತ್ತುಗಳನ್ನು ಪೂರೈಸದ ಒಟ್ಟು 2420 ಅರ್ಜಿಗಳು ಬಾಕಿಯಿದ್ದು, ಅವುಗಳನ್ನು ಪರಿಶೀಲನೆ ನಡೆಸಲಾಗುತ್ತಿದ್ದು, ಅರ್ಹ ಫಲಾನುಭವಿಗಳಿಗೆ ನೆರವಿನ ಮೊತ್ತವನ್ನು ಪಾವತಿಸಲು ಕ್ರಮಕೈಗೊಳ್ಳಲಾಗುತ್ತಿದೆ. ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ. |
| ಇ) | ಬಾಕಿ ಉಳಿಯಲು ಕಾರಣಗಳೇನು; | ಪರಿಹಾರ ನೀಡುವ ಸಂಬಂಧ ಸರ್ಕಾರದಿಂದ ಹೊರಡಿಸಲಾದ ಮಾರ್ಗಸೂಚಿಯನ್ವಯ ಷರತ್ತುಗಳನ್ನು ಪೂರೈಸದ ಹಿನ್ನೆಲೆಯಲ್ಲಿ ಪರಿಹಾರ ಪಾವತಿಸದೆ ಬಾಕಿ ಉಳಿದ 2420 ಅರ್ಜಿಗಳ ಪೈಕಿ ಕೆಲವು ಅರ್ಜಿಗಳಲ್ಲಿ ಬಿಪಿಎಲ್ ಕಾರ್ಡ್ ಸಂಖ್ಯೆ ಲಭ್ಯವಿರುವುದಿಲ್ಲ, ಕೆಲವು ಒಂದೇ ಕುಟುಂಬದ ಒಂದಕ್ಕಿಂತ ಹೆಚ್ಚು ಅರ್ಜಿದಾರರು ಅರ್ಜಿ ಸಲ್ಲಿಸಿದ್ದು, ಕೆಲವು ಅರ್ಜಿದಾರರ ಆಧಾರ್ ಸಂಖ್ಯೆಯು ಬ್ಯಾಂಕ್ ಖಾತೆಗೆ ಜೋಡಣೆಯಾಗಿರುವುದಿಲ್ಲ ಅಥವಾ ಬ್ಯಾಂಕ್ ಖಾತೆ ಊರ್ಜಿತದಲ್ಲಿರುವುದಿಲ್ಲ. ಇಂತಹ ಅರ್ಜಿಗಳನ್ನು ಪುನಃ ಪರಿಶೀಲಿಸಲಾಗುತ್ತಿದೆ.<br>ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರ ಸೇವಾಸಿಂಧು ವೆಬ್ ಪೋರ್ಟಲ್ ಮೂಲಕ ದಿನಾಂಕ: 31/07/2020ರ ಅಂತ್ಯಕ್ಕೆ ಪರಿಹಾರ ಧನ ಕೋರಿ ಒಟ್ಟು 2,45,844 ಅರ್ಜಿಗಳು ಸ್ವೀಕೃತವಾಗಿರುತ್ತವೆ ಹಾಗೂ ಸಾರಿಗೆ ಇಲಾಖೆಗೆ ಸರ್ಕಾರದಿಂದ ಪರಿಹಾರ ಧನ ವಿತರಿಸುವ ಸಂಬಂಧ 117.51 ಕೋಟಿ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ. ಸದರಿ ಅನುದಾನದಲ್ಲಿ 107.05 ಕೋಟಿಗಳನ್ನು ಇಲ್ಲಿಯವರೆಗೆ ಪರಿಹಾರ ಧನ ವಿತರಿಸಲು ಉಪಯೋಗಿಸಿದ್ದು ಒಟ್ಟು 2.15.515 ಫಲಾನುಭವಿಗಳ ಖಾತೆಗಳಿಗೆ ಪರಿಹಾರ ಧನವನ್ನು ನೇರವಾಗಿ ಜಮೆ ಮಾಡಲಾಗಿದೆ.<br>ಉಳಿದ ಫಲಾನುಭವಿಗಳಿಗೆ I.D. validation ತಾಂತ್ರಿಕ ಸಮಸ್ಯೆಯಿಂದ, ಫಲಾನುಭವಿಗಳ ಬ್ಯಾಂಕ್ ಖಾತೆಗಳು inactive ಆಗಿರುವ ಕಾರಣ ಹಾಗೂ ಬ್ಯಾಂಕ್ ಖಾತೆಗಳಿಗೆ ಆಧಾರ ಸಂಖ್ಯೆ ಲಿಂಕ್ ಆಗದಿರುವ ಕಾರಣ ಪರಿಹಾರ ಧನವನ್ನು DBT ಮುಖಾಂತರ ನೇರವಾಗಿ ಜಮೆ ಮಾಡಲು ಸಾಧ್ಯವಾಗಿರುವುದಿಲ್ಲ. |
| ಈ) | ಎಲ್ಲಾ ನೊಂದಾಯಿತ ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನುಳಿದ ಘೋಷಿತ ಶ್ರಮಿಕ ವರ್ಗದವರಿಗೆ ಸಹಾಯಧನವನ್ನು ಯಾವಾಗ ಬಿಡುಗಡೆಗೊಳಿಸಲಾಗುವುದು? | ಪರಿಹಾರ ಧನ ಕೋರಿರುವ ನೋಂದಾಯಿತ ಬಾಕಿ ಉಳಿದಿರುವ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರು, ಅಗಸರು ಹಾಗೂ ಕ್ಷೌರಿಕ ವೃತ್ತಿಯಲ್ಲಿ ತೊಡಗಿಕೊಂಡ ಅರ್ಹ ಕಾರ್ಮಿಕರಿಗೆ ಪರಿಹಾರ ಧನ ವಿತರಿಸುವ ಬಗ್ಗೆ ತಾಂತ್ರಿಕ ನ್ಯೂನತೆಗಳನ್ನು ಶೀಘ್ರವಾಗಿ ಬಗೆಹರಿಸಿ ಪರಿಹಾರ ಧನವನ್ನು ವಿತರಿಸಲಾಗುವುದು. |

**ಕಾಇ 324 ಎಲ್‌ಇಟಿ 2020**

*(ಅರಬೈಲ್ ಶಿವರಾಂ ಹೆಬ್ಬಾರ್)*
ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

# ಅನುಬಂಧ-1

| ಕ್ರ. ಸಂ. | ಜಿಲ್ಲೆ | ಸ್ವೀಕೃತವಾದ ಅರ್ಜಿಗಳ ಸಂಖ್ಯೆ. | ಹಣ ಜಮೆಯಾದ ಅರ್ಜಿಗಳ ಸಂಖ್ಯೆ. |
|---|---|---|---|
| 1 | ಗದಗ | 1113 | 975 |
| 2 | ಧಾರವಾಡ | 3536 | 3053 |
| 3 | ಹಾವೇರಿ | 1923 | 1687 |

**ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಮಾನೆ ಶ್ರೀನಿವಾಸ್ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:848ಕ್ಕೆ ಅನುಬಂಧ-2**

ಕೋವಿಡ್-19ರ ಕಾರಣ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಧಾರವಾಡ, ಗದಗ, ಹಾಗೂ ಹಾವೇರಿ ಜಿಲ್ಲೆಗಳಲ್ಲಿ ಅಗಸ ಮತ್ತು ಕ್ಷೌರಿಕ ವೃತ್ತಿಯ ಕಾರ್ಮಿಕರಿಗೆ ನೀಡಿದ ಒಂದು ಬಾರಿಯ ನೆರವಿನ ವಿವರ:

| ಕ್ರಸಂ | ಜಿಲ್ಲೆಗಳು | ನೆರವು ಪಾವತಿಸಿದ ಅರ್ಜಿಗಳು | | | ಬಾಕಿ ಉಳಿದ ಅರ್ಜಿಗಳು | | |
|---|---|---|---|---|---|---|---|
| | | ಅಗಸರು | ಕ್ಷೌರಿಕರು | ಒಟ್ಟು | ಅಗಸರು | ಕ್ಷೌರಿಕರು | ಒಟ್ಟು |
| 01 | ಧಾರವಾಡ | 1847 | 1853 | **3700** | 370 | 304 | **674** |
| 02 | ಗದಗ | 1556 | 1107 | **2663** | 393 | 127 | **520** |
| 03 | ಹಾವೇರಿ | 1609 | 1744 | **3353** | 589 | 637 | **1226** |
| | ಒಟ್ಟು | **5012** | **4704** | **9716** | **1352** | **1068** | **2420** |